## ಕರ್ನಾಟಕ ವಿಧಾನ ಪರಿಷತ್ತು.

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 591 (826) |
| ಸದಸ್ಯರ ಹೆಸರು | : | ಶ್ರೀ ಎಂ.ಎ ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 11.03.2020 |
| ಉತ್ತರಿಸುವ ಸಚಿವರು | : | ಕೃಷಿ ಸಚಿವರು |

*****

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯಲ್ಲಿ ಕೃಷಿ ಇಲಾಖೆ ವತಿಯಿಂದ ರೈತರಿಗೆ ಒದಗಿಸುವ ಕೃಷಿ ಯಂತ್ರೋಪಕರಣ ಹಾಗೂ ವಾಹನ ಖರೀದಿಗೆ ಸಹಾಯಧನ ನೀಡಲಾಗುತ್ತಿದೆಯೇ; | ಹೌದು.<br><br>ಕೃಷಿ ಇಲಾಖೆ ವತಿಯಿಂದ ಹಾಸನ ಜಿಲ್ಲೆಯ ರೈತರಿಗೆ ಸಣ್ಣ ಟ್ರ್ಯಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ದತೆ ಉಪಕರಣಗಳು, ನಾಟಿ/ ಬಿತ್ತನೆ ಉಪಕರಣಗಳು, ಟ್ರ್ಯಾಕ್ಟರ್ / ಶಕ್ತಿ ಚಾಲಿತ ಸಸ್ಯ ಸಂರಕ್ಷಣಾ ಉಪಕರಣಗಳು, ಅಂತರ ಬೇಸಾಯ ಉಪಕರಣಗಳು, ತ್ಯಾಜ್ಯ ವಸ್ತುಗಳ ನಿರ್ವಹಣಾ ಉಪಕರಣಗಳು, ಕೊಯಿಲು ಮತ್ತು ಒಕ್ಕಣೆ ಮಾಡುವ ಉಪಕರಣಗಳು ಕೃಷಿ ಸಂಸ್ಕರಣಾ ಘಟಕಗಳು ಹಾಗೂ ಡೀಸಲ್ ಪಂಪ್ ಸೆಟ್‌ಗಳನ್ನು ರಿಯಾಯಿತಿ ದರದಲ್ಲಿ ಸಹಾಯಧನ ಯೋಜನೆಗಳಡಿ ಒದಗಿಸಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಕಳೆದ ಎರಡು ವರ್ಷಗಳಿಂದ ಎಷ್ಟು ಸಹಾಯಧನವನ್ನು ಕೃಷಿಕರಿಗೆ ವಿತರಿಸಲಾಗಿದೆ; (ವರ್ಷವಾರು, ಫಲಾನುಭವಿವಾರು ಸಂಪೂರ್ಣ ಮಾಹಿತಿ ನೀಡುವುದು) | ಕಳೆದ ಎರಡು ವರ್ಷಗಳಲ್ಲಿ ಒಟ್ಟು 6240 ಫಲಾಮಭವಿಗಳಿಗೆ ರೂ.181.75 ಲಕ್ಷಗಳ ಸಹಾಯಧನ ಒದಗಿಸಲಾಗಿದೆ. ವರ್ಷವಾರು, ಫಲಾನುಭವಿಗಳವಾರು ಸಂಪೂರ್ಣ ಮಾಹಿತಿಯನ್ನು **ಅನುಬಂಧದಲ್ಲಿ** ಒದಗಿಸಲಾಗಿದೆ (ಮಾಹಿತಿಯು ಹೆಚ್ಚು ಪುಟಗಳಿರುವುದರಿಂದ ಪ್ರಶ್ನೆ ಕೇಳಿದ ಸದಸ್ಯರಿಗೆ ಉತ್ತರ ಒದಗಿಸಿದೆ). |
| ಇ) | ಯಾವ ಮಾದರಿಯಲ್ಲಿ ಹಾಗೂ ಯಾವ ಮಾನದಂಡದಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತಿದೆ? (ವಿವರ ನೀಡುವುದು) | • FRUITS (Farmers Registration and Unified Beneficiary Information System) Portal ತಂತ್ರಾಂಶದಲ್ಲಿ ನೊಂದಾಯಿತರಾದ ರೈತರು ಮಾತ್ರ ಕೃಷಿ ಯಂತ್ರೋಪಕರಣಗಳಿಗೆ ಕೆ–ಕಿಸಾನ್ ತಂತ್ರಾಂಶದಲ್ಲಿ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.<br>• ರೈತರು ಇಚ್ಚಿಸುವ ಯಂತ್ರೋಪಕರಣಗಳಿಗೆ ಕೆ–ಕಿಸಾನ್ ಪೋರ್ಟಲ್‌ನ Citizen Centric Login (kkisan.karnataka.gov.in) ಅಥವಾ ಸಂಬಂಧಪಟ್ಟ ರೈತ ಸಂಪರ್ಕ ಕೇಂದ್ರಗಳಲ್ಲಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ.<br>• ರೈತರು ಸಲ್ಲಿಸುವ ಅರ್ಜಿಗಳ ಜ್ಯೇಷ್ಠತೆ ಆಧಾರದ ಮೇಲೆ, ರೈತರ ವರ್ಗದ ಆಧಾರದ ಮೇಲೆ ಮತ್ತು ಅನುದಾನ ಲಭ್ಯತೆ ಆಧಾರದ ಮೇಲೆ ಸಹಾಯಧನ ಯೋಜನೆಗಳಡಿ ರೈತರಿಗೆ ಯೊಂತ್ರೋಪಕರಣಗಳನ್ನು ವಿತರಿಸಲಾಗುತ್ತದೆ.<br>• ಕೃಷಿ ಯಂತ್ರೋಪಕರಣಗಳಿಗೆ ಸಂಬಂಧಿಸಿದಂತೆ ಪ್ರತಿ ರೈತ ಫಲಾನುಭವಿಗಳಿಗೆ (ಟ್ರ್ಯಾಕ್ಟರ್ ಹೊರತುಪಡಿಸಿ), ಸಾಮಾನ್ಯ ವರ್ಗದ ರೈತರಿಗೆ ಶೇ.50% ರಷ್ಟು ಸಹಾಯಧನ ಹಾಗೂ ಪರಿಶಿಷ್ಟ ಜಾತಿ & ಪರಿಶಿಷ್ಟ ಪಂಗಡ ವರ್ಗದ ರೈತರಿಗೆ ಶೇ.90% ರಷ್ಟು ಸಹಾಯಧನವನ್ನು ಗರಿಷ್ಟ ಮಿತಿ ರೂ.1 ಲಕ್ಷದವರೆಗೆ ನೀಡಲಾಗುತ್ತಿದೆ. |

| | | |
|---|---|---|
| | | • ಸಣ್ಣ ಟ್ರ್ಯಾಕ್ಟರ್ (< 25 PTO HP) ಗಳಿಗೆ ಸಾಮಾನ್ಯ ವರ್ಗದ ರೈತರಿಗೆ ರೂ.0.75 ಲಕ್ಷ ಮತ್ತು ಪರಿಶಿಷ್ಟ ಜಾತಿ & ಪರಿಶಿಷ್ಟ ಪಂಗಡ ವರ್ಗದ ರೈತರಿಗೆ ರೂ.3.00 ಲಕ್ಷ ಸಹಾಯಧನ ನೀಡಲಾಗುತ್ತದೆ.<br>• ಕೃಷಿ ಇಲಾಖೆಯಿಂದ ದರ ಕರಾರು ಸಂಸ್ಥೆಗಳ ಎಂಪ್ಯಾನಲ್‌ಗೊಂಡಿರುವ ಯಂತ್ರೋಪಕರಣಗಳನ್ನು ಮಾತ್ರ ಸಹಾಯಧನ ಯೋಜನೆಯಡಿ ವಿತರಿಸಲಾಗುತ್ತದೆ.<br><br>ರೈತರು ಯಾವುದಾದರೂ ಉಪಕರಣವನ್ನು ರಿಯಾಯಿತಿ ದರದಲ್ಲಿ ಕೃಷಿ ಇಲಾಖೆ ಮತ್ತು ಕೃಷಿ ಸಂಬಂಧಿತ ಇಲಾಖೆಗಳ ಮೂಲಕ ಪಡೆದಿದ್ದಲ್ಲಿ, ಅದೇ ಉಪಕರಣವನ್ನು ಮುಂದಿನ ಮೂರು ಆರ್ಥಿಕ ವರ್ಷಗಳಲ್ಲಿ ರಿಯಾಯಿತಿ ದರದಲ್ಲಿ ಪಡೆಯಲು ಅರ್ಹರಿರುವುದಿಲ್ಲ. |

**ಇ-ಸಂಖ್ಯೆ: AG/ASC/17/2020.**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು.